ಆರ್. ಆರ್. ಜೋಶಿ

# ಮುಂಡ್ಕಿಯ ಒಂದು ಅಪೂರ್ವ ಸೂರ್ಯನ ವಿಗ್ರಹ

ಇಂದಿನವರೆಗೂ ಸೂರ್ಯನ ಆರಾಧನೆಯ ಸ್ಥಳವಾಗಿದ್ದ ಮುಂಡ್ಕಿ (ಅರ್ಲವಾಡದ ಒಂದು ಭಾಗ) ಅಳ್ನಾವರದಿಂದ ಪಶ್ಚಿಮಕ್ಕೆ ಸುಮಾರು ಐದು ಕಿ.ಮೀ. ದೂರದಲ್ಲಿದೆ. ಇಲ್ಲಿ ಪ್ರಾಚೀನ ಪ್ರಸಿದ್ಧ ಸೂರ್ಯ ದೇವಾಲಯ, ಕಲ್ಮೇಶ್ವರ ದೇವಾಲಯ, ಮೂರ್ತಿಶಿಲ್ಪಗಳು ಹಾಗೂ ವೀರಗಲ್ಲುಗಳಿವೆ.

ಮುಂಡ್ಕಿಯ ಪ್ರಾಚೀನತೆ ಇದುವರೆಗೂ ತಿಳಿದು ಬಂದಿಲ್ಲ. ಅನಿಲಾಪುರ (ಇಂದಿನ ಅಳ್ನಾವರ) ಗೋವೆಯ ಕದಂಬರ ಉಪರಾಜಧಾನಿಯಾಗಿತ್ತು. ಮುಂಡ್ಕಿ ಈ ರಾಜಧಾನಿ ಪಟ್ಟಣದ ಒಂದು ಮುಖ್ಯ ಪುರವಾಗಿರಬಹುದು.

ಸೂರ್ಯನ ದೇವಾಲಯ : ಪ್ರಾಚೀನವಾದ ಈ ದೇವಾಲಯ ಬಹಳಷ್ಟು ನಾಶವಾಗಿದ್ದು, ಅರ್ಲವಾಡದ ಪ್ರಜ್ಞಾವಂತ ಜನರಿಂದ ಈಗ ಜೀರ್ಣೋದ್ಧಾರಗೊಳ್ಳುತ್ತಿದೆ. ಗರ್ಭಗುಡಿಯಲ್ಲಿ ಎತ್ತರದ ಚತುರ್ರಥ ಪಾಣಿಪೀಠದ ಮೇಲೆ ಸುಂದರವಾದ ಸೂಕ್ಷ್ಮ ಕೆತ್ತನೆಯ ಸಮಭಂಗದಲ್ಲಿಯ ಸೂರ್ಯನ ವಿಗ್ರಹವು ಅತ್ಯಂತ ಮನೋಹರವಾಗಿದೆ. ಪಾಣಿಪೀಠ ೭೨ ಸೆಂ. ಮೀ. ಎತ್ತರ, ೧.೩೩ ಸೆಂ. ಮೀ. ಅಗಲವಾಗಿದೆ. ಇದರ ಬಲಗಡೆ ಜಲಹರಿಯಿದೆ. ಇದು ಸಹಾ ಆಕರ್ಷಕವಾಗಿದ್ದು, ಅರಳಿದ ಪದ್ಮದ ಹಾಗಿದೆ. ಸೂರ್ಯನ ಹಿಂದಿನ ಮಕರತೋರಣದ ಪ್ರಭಾವಳಿ ಸಂಪೂರ್ಣ ಭಗ್ನವಾಗಿದ್ದರೂ ಇಡಿ ಶಿಲ್ಪದ ಭವ್ಯತೆಗೆ, ಚೆಲುವಿಗೆ ಕುಂದುಬಂದಿಲ್ಲ. ಈ ಮಕರತೋರಣದ ನಾಲ್ಕೈದು ಭಾಗಗಳು ಭಗ್ನವಾಗಿ ಬಿದ್ದಿವೆ. ಮಕರಗಳ ಬಾಯಿಯಿಂದ ಹೊರಹೊರಟ ಕಲಾತ್ಮಕವಾದ ಹೂಬಳ್ಳಿಯಲ್ಲಿ ಅಷ್ಟದಿಕ್ಪಾಲಕರು, ಮಾಲಾಕಾರರು, ಉಷಾ ಪ್ರತ್ಯುಷಾರನ್ನು ನೋಡಬಹುದು.

ಸೂರ್ಯನ ವಿಗ್ರಹ : ಈ ವಿಗ್ರಹದ ಎತ್ತರ ೨.೩೬ ಸೆಂ.ಮೀ. ಹಾಗೂ ಅಗಲ ೭೫ ಸೆಂ. ಮೀ. ದ್ವಿಭುಜ ಸೂರ್ಯನು ಪದ್ಮಪೀಠದ ಮೇಲೆ ಸಮಭಂಗದಲ್ಲಿ ನಿಂತಿರುವನು. ಈ ದೇವತೆಯು ಕೈಗಳಲ್ಲಿ ಸೂಕ್ಷ್ಮ ಕಲಾ ಕೆತ್ತನೆಯ ಪದ್ಮಗಳನ್ನು ಬೆರಳುಗಳಿಂದ ಹಿಡಿದಿರುವನು. ಕೈಬಳೆ, ತೋಳಬಂಧ, ಭುಜಬಂಧಗಳಿವೆ. ಎಲ್ಲಾ ಬೆರಳುಗಳಲ್ಲಿ ಉಂಗುರಗಳಿವೆ. ಕಾಲುಗೆಜ್ಜೆ, ಕಾಲಖಡಗ, ಮೇಖಲ, ಕಾಲುಂಗರಗಳಿವೆ. ಕೊರಳಲ್ಲಿ ಒಂದು ಎಳೆಯ ಸರ, ಪದ್ಮಪದಕದ ಸರ, ಉದ್ದನೆಯ ಸರ, ಯಜ್ಞೋಪವೀತ, ವೈಜಯಂತಿಮಾಲೆ ಮುಂತಾದ ಅಲಂಕೃತ ಸೂಕ್ಷ್ಮಕೆತ್ತನೆಯ ಆಭರಣಗಳಿಂದ ಅಲಂಕೃತವಾಗಿದ್ದಾನೆ. ಟೊಂಕಾಭರಣವು ಗಮನಾರ್ಹವಾಗಿದೆ. ಸುಂದರ ಕಲಾತ್ಮಕವಾದ ಕರಂಡ ಕಿರೀಟವಿದೆ. ಕಿರೀಟದ ಮೇಲೆ ಸಿಂಹಮುಖದಿಂದ ಹೊರಬಂದ ಮುತ್ತಿನ ಕುಚ್ಚು ಕಲಾತ್ಮಕವಾಗಿದೆ. ಕಿರೀಟದ ನಡುವೆ ಪದಕವಿದೆ. ಕಿರೀಟದ ಆಚೆ ಈಚೆ ಮುತ್ತಿನಸರ ಜೋತುಬಿದ್ದಿದೆ. ಕಿವಿಯಲ್ಲಿ ಕರ್ಣಕುಂಡಲಗಳಿವೆ. ಸೂರ್ಯನ ಮುಖಭಾವ ಗಂಭೀರವಾಗಿದೆ. ಮುತ್ತಿನ ಅಂಚಿನ ಪ್ರಭಾವಳಿಯು ಇದೆ.

ಪ್ರಭಾವಳಿಯ ಕೆಳಗೆ ಸೂರ್ಯನ ಎಡಕ್ಕೆ ಇಬ್ಬರು ಚಾಮರಧಾರಣಿಗಳು ನಿಂತಿದ್ದಾರೆ. ಒಬ್ಬಳು ಒಂದು ಕೈಯಲ್ಲಿ ಚಾಮರ, ಇನ್ನೊಂದು ಕೈಯಲ್ಲಿ ಪೂರ್ಣಾಫಲವನ್ನು ಹಿಡಿದಿದ್ದಾಳೆ. ಇನ್ನೊಬ್ಬಳು ಒಂದು ಕೈಯಲ್ಲಿ

ಚಾಮರ, ಮತ್ತೊಂದು ಕೈಯನ್ನು ತಲೆಯ ಮೇಲ್ಗಡೆ ಹಿಡಿದಿರುವಳು. ಬಲಗಡೆಗೆ ಇರುವ ಇಬ್ಬರು ಚಾಮರಧಾರಣಿಗಳು ಎಡಕ್ಕೆ ಇರುವ ಚಾಮರಧಾರಣಿಗಳಂತೆ ಇದ್ದಾರೆ. ಆದರೆ ಇಲ್ಲಿ ತಲೆಯ ಮೇಲ್ಗಡೆ ಹಿಡಿದಿರುವವಳ ಕೈಯಲ್ಲಿ ಹೂಗೊಂಚಲವಿದೆ. ಇವರೆಲ್ಲರೂ ದ್ವಿಭಂಗದಲ್ಲಿ ಇದ್ದು, ಸರ್ವ ಅಲಂಕೃತರಾಗಿದ್ದಾರೆ. ಕೊನೆಯ ಚಾಮರಧಾರಣಿಗಳು ಕತ್ತರಿಕಾಲಿನಲ್ಲಿ ನಿಂತಿದ್ದಾರೆ.

ಸೂರ್ಯನ ಪೀಠದ ಮೇಲೆ ಉಬ್ಬುಶಿಲ್ಪದಲ್ಲಿ ಏಳು ಕುದುರೆಗಳ ನಡುವೆ ಸಾರಥಿಯಾದ ಅರಣನಿರುವನು. ಒಟ್ಟಿನಲ್ಲಿ ಇದೊಂದು ಗೋವೆಯ ಕದಂಬರ ವಿಶಿಷ್ಟ ಮಾದರಿಯ ಕಲಾತ್ಮಕ, ಸೂಕ್ಷ್ಮಕೆತ್ತನೆಯ, ಮನ ಮೋಹಕ ಕೃತಿಯಾಗಿದೆ. ಅಷ್ಟೇ ಅಲ್ಲದೇ. ಈ ಭಾಗದ ಒಂದು ಮೇರುಕೃತಿಯಾಗಿದೆ. ಶೈಲಿಯ ದೃಷ್ಟಿಯಿಂದ ನೋಡಲಾಗಿ ಇದು ೧೨ನೇ ಶತಮಾನಕ್ಕೆ ಸೇರಿದ್ದಾಗಿದೆ ಯೆಂದು ಹೇಳಬಹುದು.

ಭೈರವ : ಈ ಶಿಲಾಪ್ರತಿಮೆಯ ಎತ್ತರ ೧.೧೦ ಸೆಂ.ಮೀ. ಹಾಗೂ ಅಗಲ ೬೧ ಸೆಂ. ಮೀ. ಗುಡಿಯ ಮುಂಭಾಗದ ಎಡಕ್ಕೆ ಈ ಪ್ರತಿಮೆ ಇದೆ. ಭೈರವನು ನಾಲ್ಕು ಕೈಗಳಲ್ಲಿ ತ್ರಿಶೂಲ, ಖಡ್ಗ, ಢಮರು, ರಾಕ್ಷಸನ ಜುಟ್ಟನ್ನು ಹಿಡಿದಿರುವನು. ತನ್ನ ಬಲಗಾಲನ್ನು ನಾಯಿಯ ಬೆನ್ನಮೇಲಿಟ್ಟಿರುವನು. ಇದೊಂದು ಗಮನಾರ್ಹ ಭಂಗಿಯಾಗಿದೆ. ನಾಯಿಯು ರಾಕ್ಷಸನ ರುಂಡವನ್ನು ನೆಕ್ಕಲು ಕಾತುರವಾಗಿದೆ. ೧೫ ರುಂಡಗಳು ವೈಜಯಂತಿಮಾಲೆ, ನಾಗಸರ್ಪದ ಕೊರಳಹಾರ, ಕೈಬಳೆ, ಖಡೆ, ಮೇಖಲ, ಕಾಲಗೆಜ್ಜೆ, ಕಿವಿಯೋಲೆ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿದ್ದಾನೆ. ತಲೆಕೂದಲು ತಲೆಯಹಿಂದೆ ಸುತ್ತಲೂ ಹರಡಿ ಎತ್ತರವಾದ ಪ್ರಭಾವಳಿಯಂತೆ ಇದೆ. ಮುಖದಲ್ಲಿ ರೌದ್ರರೂಪವಿದೆ. ಇದು ಸಹಾ ಗೋವೆಯ ಕದಂಬರ ಅಪರೂಪದ ಮಾದರಿಯ ಕಲಾಕೃತಿಯಾಗಿದೆ.

ವಿಘ್ನೇಶ್ವರ : ಈ ಮೂರ್ತಿಯ ಎತ್ತರ ೭೫ ಸೆಂ.ಮೀ. ಹಾಗೂ ಅಗಲ ೬೦ ಸೆಂ.ಮೀ. ಚತುರ್ಮುಖನಾದ ಗಣಪತಿಯು ಸುಖಾಸೀನನಾಗಿದ್ದಾನೆ. ಹಿಂದಿನ ಎರಡೂ ಕೈಗಳು ಭಗ್ನವಾಗಿವೆ. ಮುಂದಿನ ಒಂದು ಕೈಯಲ್ಲಿ ದಂತವನ್ನು, ಇನ್ನೊಂದು ಕೈಯಲ್ಲಿ ಮೋದಕ ಪಾತ್ರೆಯನ್ನು ಹಿಡಿದಿರುವನು. ಇವನ ಸೊಂಡಿಲು ಬಲಮುರಿಯಾಗಿದೆ. ಹೊಟ್ಟೆಯ ಮೇಲೆ ನಾಗ ಉದರ ಬಂಧವಿದೆ. ಭುಜಸರ,ಕೊರಳಹಾರ, ಕೈಬಳೆ, ಮುಂತಾದ ಆಭರಣಗಳಿಂದ ಅಲಂಕೃತನಾಗಿದ್ದಾನೆ. ಇದು ಸಹಾ ೧೨ನೇ ಶತಮಾನಕ್ಕೆ ಸೇರಿದ್ದಾಗಿದೆ.

ರಾಜಯೋಗಿ : ಈತನ ಎತ್ತರ ೭೫ ಸೆಂ.ಮೀ., ಅಗಲ ೫೭ ಸೆಂ.ಮೀ. ಪದ್ಮಾಸೀನನಾಗಿ ಕುಳಿತಿರುವನು. ಕೈಗಳು ಯೋಗಮುದ್ರೆಯಲ್ಲಿವೆ. ಕೈಬಳೆ, ಬಾದಾಮಿ ಆಕಾರದ ತೋಳಬಂಧಗಳಿವೆ. ಯಜ್ಞೋಪವೀತವಿದೆ. ಮೇಲ್ಗಡೆ ಛತ್ರವಿದೆ. ಪ್ರಭಾವಳಿಯ ಸಿಂಹಮುಖದಿಂದ ಹೊರಬಂದ ಹೂಬಳ್ಳಿ ಕಲಾತ್ಮಕವಾಗಿದೆ. ಯೋಗಿಯ ಪಾದದ ಹತ್ತಿರ ಆಚೆ ಈಚೆ ಸ್ತ್ರೀಪುರುಷ ಭಕ್ತರಿರುವರು. ಯೋಗಿಯ ಹಿಂದೆ ಆಚೆ ಈಚೆ ಚಾಮರಗಳಿವೆ. ಈ ಶಿಲ್ಪವನ್ನು ನೋಡಿದಾಕ್ಷಣ ಇದು ತೀರ್ಥಂಕರ ವಿಗ್ರಹವೆಂದು ಭಾಸವಾಗುತ್ತದೆ. ಇದು ಸಹಾ ೧೨ನೇ ಶತಮಾನಕ್ಕೆ ಸೇರಿದ್ದಾಗಿದೆ.

ಮೂಲಸ್ಥಾನ ದೇವರಾದ ಶ್ರೀ ಸೂರ್ಯ ನಾರಾಯಣನಿಂದ ಹಿಡಿದು ಇಲ್ಲಿರುವ ಎಲ್ಲ ವಿಗ್ರಹಗಳಿಗೆ ಕಂತಿ ಮಾಡಿಸಿದ್ದಾರೆ. ಆದಾಗ್ಯೂ ಅವುಗಳ ಆಕರ್ಷಣೆಗೆ ಕುಂದುಬಂದಿಲ್ಲ.

ರಾಷ್ಟ್ರಕೂಟ ಕಾಲದ ವೀರಗಲ್ಲು : ಇದರ ಎತ್ತರ ೧.೮೫ ಸೆಂ.ಮೀ.,ಅಗಲ ೯೪ ಸೆಂ.ಮೀ. ಹಾಗೂ ದಪ್ಪ ೧೧ ಸೆಂ. ಮೀ. ಇದು ಗೋಗ್ರಹಣದ ವೀರಗಲ್ಲು ವೀರನ ಹಿಂದೆ ಏಳು ಆಕಳುಗಳು ನಿಂತಿವೆ. ವೈರಿಗಳು ಧನುರ್ಧಾರಿಗಳಾಗಿದ್ದಾರೆ. ವೀರನು ಖಡ್ಗ ಮತ್ತು ಢಾಲುಗಳನ್ನು ಹಿಡಿದಿರುವನು. ಮಧ್ಯಭಾಗದಲ್ಲಿ ವೀರನು ಅಪ್ಸರೆಯ ಭುಜದ ಮೇಲೆ ಕೈಹಾಕಿ ಮೇಲೆ ಹಾರುವ ಸ್ಥಿತಿಯಲ್ಲಿರುವನು. ಸುತ್ತಲೂ ವಾದ್ಯಗಾರರಿರುವರು. ಮೇಲ್ಭಾಗದಲ್ಲಿ ವೀರನು ಆಸನದ ಮೇಲೆ ಸುಖಾಸೀನನಾಗಿ ಕುಳಿತಿರುವನು. ತನ್ನ ಕೈಗಳಲ್ಲಿ ಪದ್ಮಗಳನ್ನು ಹಿಡಿದಿರುವನು. ಇವನ ಆಚೆ ಈಚೆ ಚಾಮರ ಧಾರಣಿ ಅಪ್ಸರೆಯರಿರುವರು. ಈ ಬಿಡಿಶಿಲ್ಪ ಎರಡು ಕಂಬಗಳ ನಡುವೆ ಚಿತ್ರಿಸಲ್ಪಟ್ಟಿದೆ. ಮೇಲ್ಭಾಗದಲ್ಲಿ ಶಾಲಾ ಮಾದರಿಯ ಶಿಖರವಿದೆ. ಆಚೆ ಈಚೆ ಸಣ್ಣ

ಶಿಖರಗಳಿವೆ. ಈ ವೀರಗಲ್ಲನ್ನು ಸೂಕ್ಷ್ಮದೃಷ್ಟಿಯಿಂದ ನೋಡಲಾಗಿ ಇದು ರಾಷ್ಟ್ರಕೂಟರ ಕಾಲದ ವೀರಗಲ್ಲಾಗಿದೆ. ಆದರೆ ಮುಂಡ್ಕಿಯ ಪ್ರಾಚೀನತೆ ರಾಷ್ಟ್ರಕೂಟರ ಕಾಲಕ್ಕೆ (೯ನೇ ಶತಮಾನಕ್ಕೆ) ಹೋಗುತ್ತದೆ. ಮುಂದೆ ಗೋವೆಯ ಕದಂಬರ ಕಾಲದಲ್ಲಿ ಇದು ಒಂದು ಧಾರ್ಮಿಕ ಕೇಂದ್ರವಾಗಿ ಪ್ರಸಿದ್ಧಿ ಹೊಂದಿರಬಹುದು.

### ಕಲ್ಮೇಶ್ವರ ದೇವಾಲಯ

ಪ್ರಾಚೀನವಾದ ಈ ದೇವಾಲಯ ಪೂರ್ಣ ಭಗ್ನವಾಗಿದೆ. ಇದರ ಸುತ್ತಮುತ್ತಲೂ ಗುರುತಿಸಲಾರದಷ್ಟು ಜಿನ, ಕೇಶವ, ಭೈರವ ಮುಂತಾದ ಶಿಲಾಪ್ರತಿಮೆಗಳು ಭಗ್ನವಾಗಿ ಬಿದ್ದಿವೆ. ಆದ್ದರಿಂದ ಇಲ್ಲಿ ಶೈವ, ಜೈನ, ವೈಷ್ಣವ ಧರ್ಮಗಳು ಪ್ರಚಲಿತದಲ್ಲಿ ಇದ್ದವು ಎಂದು ಹೇಳಬಹುದು. ಕಾಳಾಮುಖ ಶೈವರು ಸೂರ್ಯೋಪಾಸಕರಾಗಿದ್ದು ಅವನ ಆರಾಧಕರೂ ಆಗಿದ್ದರು. ಇದಕ್ಕೆ ಇಲ್ಲಿರುವ ಬೃಹದಾಕಾರದ ಸೂರ್ಯನ ಸುಂದರ ಕಲಾಕೃತಿಯೇ ಸಾಕ್ಷಿಯಾಗಿದೆ. ಬಹುಶಃ ಇದು ಕಾಳಾಮುಖ ಶೈವರ ಸ್ಥಳ ಇರಬಹುದು. ಧಾರ್ಮಿಕ ಕೇಂದ್ರವಾಗಿ, ಕಲಾಸಂಪತ್ತಿನ ಬೀಡಾಗಿ ಮೆರೆದ ಮುಂಡ್ಕಿ ಈಗ ಒಂದು ಹಾಳೂರಾಗಿದೆ.*

---

* ಈ ಪ್ರಬಂಧವನ್ನು ಬರೆಯಲು ಸಹಾಯ ಮಾಡಿದ ನನ್ನ ಮಾರ್ಗದರ್ಶಿಗಳಾದ ಡಾ॥ ಎಚ್. ಆರ್. ರಘುನಾಥಭಟ್ಟರಿಗೆ ನಾನು ಕೃತಜ್ಞನಾಗಿದ್ದೇನೆ.